KA / BG-GPO / 2515 / WPP-47 / 2006-2008




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೦೭ (ಆಶ್ವಯುಜ ೫, ಶಕ ವರ್ಷ ೧೯೨೯) | ಸಂಚಿಕೆ ೩೯ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ:ಆಕುಕ 172 ಐಎಂಎಂ 2005, ದಿನಾಂಕ:19-11-2005.
2 ಕೆ.ಎ.ಟಿ. ಆದೇಶ ಸಂಖ್ಯೆ:8721/2005, ದಿನಾಂಕ: 18-07-2006.
3 ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶ ಸಂಖ್ಯೆ:26250 2005, ದಿನಾಂಕ:09-12-2005.
4 ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 95 ಐಎಂಎಂ 2006, ದಿನಾಂಕ:19-08-2006.
5 ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ:ಆಕುಕ 172 ಐಎಂಎಂ 2005, ದಿನಾಂಕ:19-12-2006.
6 ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು ಇವರ ಲಿಖಿತ ಹೇಳಿಕೆ ದಿನಾಂಕ: 30.01.2007.

**ಪ್ರಸ್ತಾವನೆ:**

ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ವೃತ್ತ-I ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ದಿನಾಂಕ:30-10-2005 ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟವಾದ ನಕಲಿ ಔಷಧ ತನಿಖೆ ದುರ್ಬಲಗೊಳಿಸಲು ಸರ್ಕಾರದಿಂದಲೇ ಯತ್ನ ಎಂಬ ಶಿರೋನಾಮೆಯಲ್ಲಿ ಸರ್ಕಾರದ ಬಗ್ಗೆ ತಪ್ಪು ಅಭಿಪ್ರಾಯ ಬರುವ ರೀತಿಯಲ್ಲಿ ಪತ್ರಿಕೆಯಲ್ಲಿ ಮಾಹಿತಿ ನೀಡಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ, ಸದರಿಯವರ ಈ ನಡವಳಿಕೆಯು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966 ರ ನಿಯಮ 3(iii) ರಂತೆ ಸರ್ಕಾರಿ ನೌಕರರ ನಡತೆಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿರುವುದು ಕಂಡುಬಂದಿರುವುದರಿಂದ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10(1)ಡಿ ರನ್ವಯ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಮೇಲೆ ಓದಲಾದ ಕ್ರ.ಸಂ. (1) ರ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (2) ಮತ್ತು (3) ರ ಕೆ.ಎ.ಟಿ. ಮತ್ತು ಉಚ್ಚ ನ್ಯಾಯಾಲಯದ ಆದೇಶದ ಅನುಗುಣವಾಗಿ ಮೇಲೆ ಓದಲಾದ ಕ್ರ.ಸಂ. (4) ರ ಅಧಿಸೂಚನೆಯಲ್ಲಿ, ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು ಇವರ ಅಮಾನತ್ತು ಆದೇಶವನ್ನು ರದ್ದುಗೊಳಿಸಿ ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಬೀದರ್ ವೃತ್ತ, ಬೀದರ್ ಇಲ್ಲಿಗೆ ಖಾಲಿ ಇರುವ ಸಹಾಯಕ ಔಷಧ ನಿಯಂತ್ರಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ದಿನಾಂಕ:19-12-2006 ರಂದು ಹೊರಡಿಸಿದ ಸರ್ಕಾರದ ತಿಳುವಳಿಕೆ ಪತ್ರದಲ್ಲಿ, ಶ್ರೀ ಹೆಚ್. ಶ್ರೀನಿವಾಸ ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ರ ಪ್ರಕಾರ, ದುರ್ನಡತೆಯ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ, ಆರೋಪಗಳ ಬಗ್ಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಬೇಕೆಂದು ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (6) ರ ಲಿಖಿತ ಹೇಳಿಕೆಯಲ್ಲಿ ಶ್ರೀ ಹೆಚ್. ಶ್ರೀನಿವಾಸ ಇವರು ಮಾಡಿರುವ ಎಲ್ಲಾ ಆಪಾದನೆಗಳ ಬಗ್ಗೆ ತಮ್ಮ ಸಮಜಾಯಿಷಿ ಉತ್ತರವನ್ನು ನೀಡಿ, ಆಪಾದನೆಗಳನ್ನು ಅಲ್ಲಗಳೆದಿದ್ದಾರೆ. ಸರ್ಕಾರವು ಸದರಿ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ಕಂಡುಹಿಡಿದು ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳಲು ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 172 ಐಎಂಎಂ 2005, ಬೆಂಗಳೂರು, ದಿನಾಂಕ:23ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ವಿರುದ್ಧ ಆರೋಪ ಕುರಿತು ವಿಚಾರಣೆ ಮಾಡಲು ಶ್ರೀ ಇಂದೂಧರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.8, 15ನೇ ಕ್ರಾಸ್, 5ನೇ ಹಂತ, ಜೆ.ಪಿ. ನಗರ, ಬೆಂಗಳೂರು-78 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005, ದಿನಾಂಕ:23-08-2000 ರನ್ವಯ ರೂ. 6000 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:04-03-2002 ರನ್ವಯ ರೂ. 1000 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಡೆಯುತ್ತಾರೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಬುಲ್ ಮೊಹಿಸಿನ್, ಉಪ ಔಷಧ ನಿಯಂತ್ರಕರು, ರಕ್ತ ನಿಧಿ ಮತ್ತು ಗುಪ್ತ ವಾರ್ತೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಕ ಮಾಡಲಾಗಿದೆ.

ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯನ್ನು ನಡೆಸಿ ಮೂರು ತಿಂಗಳ ಒಳಗಾಗಿ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.

ಔಷಧ ನಿಯಂತ್ರಕರು ವಿಚಾರಣಾಧಿಕಾರಿಯವರಿಗೆ ವಿಚಾರಣೆಯನ್ನು ನಡೆಸಲು ಅನುಕೂಲವಾಗುವಂತೆ ಸೂಕ್ತ ಸ್ಥಳ ಏರ್ಪಾಡು ಮಾಡಿ ಸಹಕಾರ ನೀಡಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1402

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಡಾ:ಎ. ಹೇಮಾರೆಡ್ಡಿ, ವೈದ್ಯರು ದರ್ಜೆ-2 ಇವರು ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಿಕ್ಕಿಬಿದ್ದಿದ್ದರಿಂದ ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರಿ ಆದೇಶ ಸಂಖ್ಯೆ:ಆಕುಕ 559 ಪಿಐಎಂ 99, ದಿನಾಂಕ:01-08-2002.

2 ಸರ್ಕಾರಿ ಆದೇಶ ಸಂಖ್ಯೆ:ಆಕುಕ 559 ಪಿಐಎಂ 99, ದಿನಾಂಕ:07-01-2004.

3 ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ.ಜಿ.28/ ಸಿಆರ್-4/99/ಸಿಸಿಎಂ, ದಿನಾಂಕ:24-02-2004.

4 ಚಿಕ್ಕಮಗಳೂರು ವಿಶೇಷ ನ್ಯಾಯಾಲಯವು ವಿಶೇಷ ಕೇಸ್ ಸಂಖ್ಯೆ:43/2002, ದಿನಾಂಕ:29-03-2005 ರಂದು ನೀಡಿದ ತೀರ್ಪು.

5 ಸರ್ಕಾರದ ಪತ್ರ ಸಂಖ್ಯೆ:ಹೆಚ್.ಡಿ.-7486/ಹೆಚ್‌ಸಿಪಿ-II/ 2005, ದಿನಾಂಕ:19-07-2005.

6 ಸರ್ಕಾರಿ ಆದೇಶ ಸಂಖ್ಯೆ:ಆಕುಕ 559 ಪಿಐಎಂ 99, ದಿನಾಂಕ:30-11-2005.

7 ಡೆಪ್ಯುಟಿ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:Compt/Uplok/Mys 331/2005/DRE-3, ದಿನಾಂಕ:21-04-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಆದೇಶದಲ್ಲಿ, ಡಾ:ಎ. ಹೇಮಾರೆಡ್ಡಿ, ವೈದ್ಯರು ದರ್ಜೆ-2 ಇವರು ಚಿಕ್ಕಮಗಳೂರು ಜಿಲ್ಲೆ, ಕಡೂರು ಸರ್ಕಾರಿ ಆಯುರ್ವೇದ ಆಸ್ಪತ್ರೆಯಲ್ಲಿ 1999 ರಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸಂದರ್ಭದಲ್ಲಿ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದರಿಂದ, ಲಂಚ ನಿರೋಧಕ ಕಾಯ್ದೆ 1988 ರ ಪ್ರಕರಣ 7(13)(1)ಡಿ ಜೊತೆಯಲ್ಲಿ ಓದಲಾದ 13(2) ರಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರ.ಸಂ. (2) ರ ಆದೇಶದಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14(ಎ) ರಡಿಯಲ್ಲಿ ಡಾ:ಎ. ಹೇಮಾರೆಡ್ಡಿ ಇವರ ವಿರುದ್ಧ ಮಾಡಲಾದ ಸದರಿ ಆಪಾದನೆಯ ಮೇಲೆ ವಿಚಾರಣೆಯನ್ನೂ ಸಹ ಪ್ರಾರಂಭಿಸಲು ಕರ್ನಾಟಕ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಕರ್ನಾಟಕ ಲೋಕಾಯುಕ್ತದ ನಿಬಂಧಕರು ಮೇಲೆ ಓದಲಾದ ಕ್ರ.ಸಂ. (3) ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ (3) ರಡಿಯಲ್ಲಿ ಸದರಿ ಪ್ರಕರಣದಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿಲ್ಲವಾದ್ದರಿಂದ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14(ಎ) ರಡಿಯಲ್ಲಿ ಲೋಕಾಯುಕ್ತರಿಗೆ ವಹಿಸಲು ಬರುವುದಿಲ್ಲವೆಂದು ತಿಳಿಸಿ, ಸದರಿ ನಿಯಮದ 11 ರ ಪ್ರಕಾರ ವಿಚಾರಣೆಯನ್ನು ನಡೆಸಬಹುದೆಂದು ತಿಳಿಸಿದ್ದರು. ಸರ್ಕಾರವು ಸದರಿ ಪ್ರಕರಣವು ನ್ಯಾಯಾಲಯದಲ್ಲಿ ಇರುವುದರಿಂದ ಇಲಾಖಾ ವಿಚಾರಣೆಯನ್ನು ನಡೆಸುವುದನ್ನು ಕೈಬಿಡಲು ತೀರ್ಮಾನಿಸಿತ್ತು.

ಚಿಕ್ಕಮಗಳೂರು ವಿಶೇಷ ನ್ಯಾಯಾಲಯವು ಮೇಲೆ ಓದಲಾದ ಕ್ರ.ಸಂ. (4) ರಲ್ಲಿ ದಿನಾಂಕ:29-03-2005 ರಂದು ವಿಶೇಷ ಪ್ರಕರಣದ ಸಂಖ್ಯೆ:43/2002 ಕ್ಕೆ ನೀಡಿದ ತೀರ್ಪಿನಲ್ಲಿ ಡಾ:ಎ. ಹೇಮಾರೆಡ್ಡಿಯವರನ್ನು ಆರೋಪಗಳಿಂದ ಮುಕ್ತಗೊಳಿಸಿದೆ. ಮೇಲೆ ಓದಲಾದ ಕ್ರ.ಸಂ. (5) ರ ಪತ್ರದಲ್ಲಿ ಸದರಿ ವಿಶೇಷ ನ್ಯಾಯಾಲಯವು ನೀಡಿರುವ ತೀರ್ಪಿನ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಲು ಸೂಕ್ತ ಪ್ರಕರಣವೆಂದು ತಿಳಿಸಿತ್ತು. ಈ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರ.ಸಂ. (6) ರ ಆದೇಶದಲ್ಲಿ ಡಾ:ಎ. ಹೇಮಾರೆಡ್ಡಿ ಇವರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಪ್ರಕರಣದಲ್ಲಿ ನ್ಯಾಯಾಲಯದ ತೀರ್ಪಿನನ್ವಯ ಆರೋಪಗಳಿಂದ ಮುಕ್ತಗೊಳಿಸಿದೆ. ಹಾಗೂ ದಿನಾಂಕ: 07-01-2004 ರಂದು ಲೋಕಾಯುಕ್ತರಿಗೆ ವಹಿಸಲಾಗಿದ್ದ ಆದೇಶವನ್ನು ಹಿಂತೆಗೆದುಕೊಳ್ಳಲಾಗಿದೆ. ಈಗ ಡೆಪ್ಯುಟಿ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ. (7) ರ ಪತ್ರದಲ್ಲಿ ಸದರಿ ಲೋಕಾಯುಕ್ತ ಪ್ರಕರಣದಲ್ಲಿ, ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 ರ ನಿಯಮ ಸೆಕ್ಷನ್ 12(3) ರನ್ವಯ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14(ಎ) ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತರಿಗೆ ವಹಿಸಬೇಕೆಂದು ಮತ್ತು ಈ ಸಂಬಂಧ 3 ತಿಂಗಳ ಒಳಗಾಗಿ ತೆಗೆದುಕೊಂಡ ಕ್ರಮದ ಬಗ್ಗೆ ತಿಳಿಸಬೇಕೆಂದು ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 248 ಪಿಐಎಂ 2007, ಬೆಂಗಳೂರು, ದಿನಾಂಕ:23ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 14(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಎ. ಹೇಮಾರೆಡ್ಡಿ, ವೈದ್ಯರು ದರ್ಜೆ-2 ಇವರು ಪ್ರಸ್ತುತ ಉಪ ನಿರ್ದೇಶಕರು, ಆಯುಷ್ ಇಲಾಖೆ, ಗುಲ್ಬರ್ಗಾ ಇವರ ವಿರುದ್ದ ಮೇಲೆ ಹೇಳಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಇವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 1403

**ವಿಷಯ:** ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಯನ್ನು ಪ್ರೋತ್ಸಾಹಿಸಲು ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಆದೇಶ ಸಂಖ್ಯೆ:ಆಕುಕ 307 ಪಿಐಎಂ 2004, ದಿನಾಂಕ:16-09-2005.

2 ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಭಾವೈಪ/43/ಅಭಿವೃದ್ಧಿ (1)/2006-07, ದಿನಾಂಕ:13-02-2007.

**ಪ್ರಸ್ತಾವನೆ:**

ರಾಜ್ಯದ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಯ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಆ ಪದ್ಧತಿಗಳಲ್ಲಿ ಸರ್ಕಾರಕ್ಕೆ ಸೂಕ್ತ ಸಲಹೆ ನೀಡುವ ಸಲುವಾಗಿ ಮೇಲೆ ಓದಲಾದ ಕ್ರ.ಸಂ. (1) ರ ದಿನಾಂಕ:16-09-2005 ರ ಆದೇಶದಲ್ಲಿ ಒಟ್ಟು ಹನ್ನೆರಡು ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಎರಡು ವರ್ಷದ ಅವಧಿಗೆ ರಚಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2) ರ ದಿನಾಂಕ:13-02-2007 ರ ಆಯುಷ್ ನಿರ್ದೇಶಕರ ಪತ್ರದಲ್ಲಿ ಅಸ್ತಿತ್ವದಲ್ಲಿರುವ ಸಮಿತಿಯ ಅವಧಿಯು ದಿನಾಂಕ: 16-09-2007 ಕ್ಕೆ ಮುಗಿಯುವುದಿದ್ದು, ಸಮಿತಿಯಲ್ಲಿದ್ದ ಸದಸ್ಯರಲ್ಲಿ ಆದೇಶದ ಕ್ರ.ಸಂ. 3 ರ ಸದಸ್ಯರಾದ ಡಾ:ಎಂ.ಎನ್. ರಾಮನ್ ಇವರು ಮೃತ ಹೊಂದಿದ್ದಾರೆ. ಮತ್ತು ಕ್ರ.ಸಂ. 10 ರಲ್ಲಿರುವ ಡಾ:ಸತ್ಯನಾರಾಯಣ ಮೂರ್ತಿ ಇವರು ಸಮಿತಿಯ ಒಂದು ಸಭೆಗೆ ಹಾಜರಾಗಿಲ್ಲವಾದ್ದರಿಂದ ಇವರ ಬದಲಿಗೆ ಇಬ್ಬರು ಸದಸ್ಯರನ್ನು ನಾಮ ನಿರ್ದೇಶನ ಮಾಡಬೇಕೆಂದು ನಿರ್ದೇಶಕರು ಪ್ರಸ್ತಾಪಿಸಿದ್ದಾರೆ. ಸರ್ಕಾರವು ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 99 ಪಿಐಎಂ 2007, ಬೆಂಗಳೂರು, ದಿನಾಂಕ:01ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ರಾಜ್ಯದಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಚಿಕಿತ್ಸೆಯನ್ನು ಪ್ರೋತ್ಸಾಹಿಸಲು ರಚಿಸಲಾದ ಸದರಿ ಸಲಹಾ ಸಮಿತಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಆಕುಕ 307 ಪಿಐಎಂ 2004, ದಿನಾಂಕ: 16-09-2005 ರಲ್ಲಿ ರಚಿಸಲಾದ ರಾಜ್ಯ ಮಟ್ಟದ ಸಲಹಾ ಸಮಿತಿಯ ಕ್ರ.ಸಂ. 3 ರಲ್ಲಿನ ಡಾ:ಎಂ.ಎನ್. ರಾಮನ್‌ರವರ ನಿಧನದಿಂದಾಗಿ ಖಾಲಿ ಇರುವ ಸ್ಥಾನಕ್ಕೆ ಹಾಗೂ ಕ್ರ.ಸಂ. 10 ರಲ್ಲಿನ ಡಾ:ಸತ್ಯನಾರಾಯಣ ಮೂರ್ತಿರವರ ಬದಲಿಗೆ ಸರ್ಕಾರವು ಈ ಕೆಳಕಂಡ ಇಬ್ಬರು ಅಭ್ಯರ್ಥಿಗಳನ್ನು ಸಮಿತಿಯ ಅಸ್ತಿತ್ವದಲ್ಲಿರುವ ಸಮಿತಿ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿ ನೇಮಿಸಿದೆ.

| ಕ್ರ. ಸಂ. | ಹೆಸರು | ಪದನಾಮ |
|---|---|---|
| 3 | ಡಾ:ನವೀನ್ ಕೆ.ವಿ.<br>ಹಿರಿಯ ತಜ್ಞರು (Senior Scientist),<br>ಸ್ವಾಮಿ ವಿವೇಕಾನಂದ ಅನುಸಂಧಾನ ಸಂಸ್ಥೆ,<br>ಅಪ್ಪಾಜಪ್ಪ ಅಗ್ರಹಾರ, ಚಾಮರಾಜಪೇಟೆ, ಬೆಂಗಳೂರು. | ಸದಸ್ಯರು |
| 10 | ಡಾ:ಪ್ರಶಾಂತ್ ಶೆಟ್ಟಿ<br>ನಿವಾಸಿ ವೈದ್ಯಾಧಿಕಾರಿ,<br>SDM ಯೋಗ ಮತ್ತು ನೇಚರ್ ಕ್ಯೂರ್ ಆಸ್ಪತ್ರೆ,<br>ಉಜಿರೆ, ಧರ್ಮಸ್ಥಳ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 1466

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಹೆಚ್.ವಿ. ದೇವರಾಜು, ಪ್ರೋಗ್ರಾಂ ಆಫೀಸರ್ (ಪ್ರಸ್ತುತ ಅಮಾನತ್ತಿನಲ್ಲಿ), ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಕುರಿತು-ಆದೇಶ.

**ಓದಲಾಗಿದೆ:**
1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ.ಲೋಕ್/ಐ.ಎನ್.ವಿ (ಜಿ)/ ಸಿಟಿ/ಕ್ರೈಂ/17/2007 ದಿನಾಂಕ: 28.5.2007.
2) ಸರ್ಕಾರಿ ಆದೇಶ ಸಂಖ್ಯೆ. ಮಮಇ 229 ಎಸ್‌ಜೆಡಿ 2007, ದಿನಾಂಕ: 06.06.2007.

**ಪ್ರಸ್ತಾವನೆ :**

ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಆಫೀಸರ್, ಇವರು ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಕಛೇರಿಯಲ್ಲಿ ಪ್ರೋಗ್ರಾಂ ಆಫೀಸರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಸದರಿಯವರನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:06.06.2007ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1)(ಎ) ರನ್ವಯ ಅಮಾನತ್ತಿನಲ್ಲಿಡಲಾಗಿತ್ತು.

ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಅಫೀಸರ್ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣವು ತನಿಖಾ ಹಂತದಲ್ಲಿದೆಯೆಂದು (Still Under investigation) ತಿಳಿದು ಬಂದಿದೆ. ಸದರಿಯವರ ಧಾರಣಾಧಿಕಾರವನ್ನು ಬೇರೊಂದು ಇಲಾಖೆಗೆ ನಿಯೋಜನೆಯ ಮೂಲಕ ಸ್ಥಳಾಂತರಿಸಿ ಇವರಿಗೆ ಸೂಕ್ತ ಸ್ಥಳನಿಯುಕ್ತಿ ಮಾಡಲು ಸರ್ಕಾರವು ತೀರ್ಮಾನಿಸಿದೆ. ಈ ಹಿನ್ನೆಲೆಯಲ್ಲಿ ಶ್ರೀ ಹೆಚ್.ಬಿ. ದೇವರಾಜು, ಹಿಂದಿನ ಪ್ರೋಗ್ರಾಂ

ಆಫೀಸರ್, (ಹಾಲಿ ಅಮಾನತ್ತಿನಲ್ಲಿರುವವರು) ಇವರ ವಿರುದ್ಧದ ಲೋಕಾಯುಕ್ತ ತನಿಖೆ ಹಾಗೂ ಇಲಾಖಾ ವಿಚಾರಣೆನ್ನು ಬಾಕಿಯಿರಿಸಿ ಸದರಿಯವರನ್ನು ಅಮಾನತ್ತಿನಿಂದ ತೆರವುಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 229 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಆಫೀಸರ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧದ ಲೋಕಾಯುಕ್ತ ತನಿಖೆ ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಇವರ ಅಮಾನತ್ತನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ತೆರವುಗೊಳಿಸಿ ಅಂಗವಿಕಲರ ಮತ್ತು ಹಿರಿಯ ನಾಗರೀಕ ಕಲ್ಯಾಣ ಇಲಾಖೆ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ಹುದ್ದೆಗೆ ನಿಯೋಜಿಸಿ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 1504

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಇವರನ್ನು ಸೇವೆಯಿಂದ ಅಮಾನತ್ತುಪಡಿಸುವ ಬಗ್ಗೆ.

**ಓದಲಾಗಿದೆ:** ಉಪ ಅರಣ್ಯ ಸಂರಕ್ಷಣಾಧಿಕಾರಿ ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ: ಸಿ2/ಡಿಎಂಎನ್-ಜಂ.8/2007-08, ದಿನಾಂಕ:14.08.2007.

**ಪ್ರಸ್ತಾವನೆ :**

ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಇವರ ವ್ಯಾಪ್ತಿಯಲ್ಲಿ ದಿನಾಂಕ:09.08.2007 ರಂದು ಬೆಳಗಿನ ಜಾವ ಸುಮಾರು 2 ರಿಂದ 2-30 ಗಂಟೆಯಲ್ಲಿ ಮೆ: ಜಂಗಲ್ ಲಾಡ್ಜಸ್ ರೆಸಾರ್ಟ್ಸ್ ಇವರಿಗೆ ಗುತ್ತಿಗೆ ನೀಡಿರುವ ಅರಣ್ಯ ಭೂಮಿಯಲ್ಲಿ ಗಂಧದ ಮರಗಳ ಅಕ್ರಮ ಕಡಿತಲೆ ಆಗಿರುವುದನ್ನು ಜಂಗಲ್ ಲಾಡ್ಜಸ್ ಮತ್ತು ರೆಸಾರ್ಟ್ಸ್‌ರವರು ನೇಮಿಸಿಕೊಂಡಿರುವ ಮತ್ತು ಅಂದು ರಾತ್ರಿ ಪಾಳೆಯಲ್ಲಿ ಕೆಲಸ ನಿರ್ವಹಿಸುತ್ತಿರುವ 3 ಮಂದಿ ಸೆಕ್ಯೂರಿಟಿ ಗಾರ್ಡ್‌ಗಳು ಸದರಿ ಸಂಸ್ಥೆಯ 9.10ನೇ ಬಂಗ್ಲೋದಿಂದ ಸುಮಾರು 20-25 ಅಡಿ ದೂರದಲ್ಲಿ 3 ಒಣಗಿ ನಿಂತ ಹಾಗೂ 1 ಶ್ರೀಗಂಧದ ಮರಗಳನ್ನು ಸುಮಾರು 18-19 ಮಂದಿ ಮರಗಳನ್ನು ಸುಮಾರು ಮರಗಳನ್ನು ಭೂಮಿಯ ಮಟ್ಟ ಅಕ್ರಮವಾಗಿ ಕಡಿದು ಸಾಗಿಸುತ್ತಿರುವ ಬಗ್ಗೆ ಜಂಗಲ್ ಲಾಡ್ಜ್ ಸಂಸ್ಥೆಯ ವಸತಿ ಗೃಹದಲ್ಲಿ ವಾಸವಿದ್ದು ಹುಣಸೂರು ರಾಜೀವ್‌ಗಾಂಧಿ ರಾಷ್ಟ್ರೀಯ ಉದ್ಯಾನವನದ ಅಂತರಸಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸುದ್ದಿ ಮುಟ್ಟಿಸಿದರೂ ಈ ಬಗ್ಗೆ ಕಾನೂನು ರೀತ್ಯಾ ಅಗತ್ಯ ಕ್ರಮ ವಹಿಸಿರುವುದಿಲ್ಲ. ಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿರುವ ವಿಷಯವನ್ನು ಸಂಸ್ಥೆಯ ನಿವಾಸಿ ವ್ಯವಸ್ಥಾಪಕರು ದೂರವಾಣಿಯ ಮೂಲಕ ತಿಳಿಸಿದ್ದರೂ ಸಹ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಯಾವುದೇ ಕ್ರಮ ವಹಿಸಿರುವುದಿಲ್ಲ. ಅಲ್ಲದೆ, ಸುದ್ದಿ ತಿಳಿದ ತಕ್ಷಣ ಸ್ಥಳಕ್ಕೆ ಭೇಟಿ ನೀಡಿ ಕಾರ್ಯಪ್ರವೃತ್ತರಾಗಿರುವುದಿಲ್ಲ. ಈ ವಿಷಯದಲ್ಲಿ ದಿನಾಂಕ: 10.08.2007 ರಂದು ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರ ಸೂಚನೆ ಮೇರೆಗೆ ತಕ್ಷಣ ಖಾರಾಪುರಕ್ಕೆ ತೆರಳಿ ಸ್ಥಳ ಪರಿಶೀಲಿಸಿ ತಪ್ಪಿತಸ್ಥರ ವಿರುದ್ಧ ಮೊಕದ್ದಮೆ ದಾಖಲಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ ಇವರು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾದ ಶ್ರೀ ಜೆ.ಎ. ಕುಮಾರ್ ಇವರಿಗೆ ಸೂಚಿಸಲ್ಪಟ್ಟರೂ ಯಾವುದೇ ರೀತಿಯಲ್ಲಿ ಕಾನೂನು ರೀತ್ಯಾ ಕ್ರಮ ವಹಿಸಿರುವುದಿಲ್ಲವೆಂದು ಮೇಲೆ ಓದಲಾದ ಪತ್ರದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ ಇವರು ವರದಿ ಮಾಡಿರುತ್ತಾರೆ.

ಆದುದರಿಂದ ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಅವರ ಈ ಕ್ರಮವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ಕ್ಕೆ ವ್ಯತಿರಿಕ್ತವಾಗಿರುವುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಪಡಿಸುವುದು ಅವಶ್ಯಕವೆಂದು ಸರ್ಕಾರವು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 165 ಅಇವಿ 2007, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2007**

ಪ್ರಸ್ತಾವನೆಯನ್ನು ವಿವರಿಸಿದ ಕಾರಣಗಳಿಂದ ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಅವರ ವಿರುದ್ಧ ಶಿಸ್ತು ಕ್ರಮವನ್ನು ಬಾಕಿ ಇರಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಗಳನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಎ. ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೇಟಿಕುಪ್ಪೆ ವನ್ಯಜೀವಿ ಉಪ ವಿಭಾಗ, ಅಂತರ ಸಂತೆ ಇವರು ಕಾರ್ಯನಿರ್ವಹಿಸುತ್ತಿರುವ ಕೇಂದ್ರಸ್ಥಾನವನ್ನು ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೆ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 1505

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಯು.ಹೆಚ್. ಮೊಹಮದ್, ಶ್ರೀ ಕೆ. ಪ್ರಬೋಧ ಹಾಗೂ ಶ್ರೀ ಪ್ರಸನ್ನಕುಮಾರ್, ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರುಗಳ ವೇತನವನ್ನು ನಿಗದಿಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಕಡತ ಸಂಖ್ಯೆ:ಅಪಜೀ 252 ಅಪಸೇ 2003.

2) ಪತ್ರ ಸಂಖ್ಯೆ:ಪವಕನಿ/ಸಿಬ್ಬಂದಿ/ಸಿಆರ್-/19/2006-07, ದಿನಾಂಕ: 20.05.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕಡತದಲ್ಲಿ ಅರಣ್ಯ ಇಲಾಖೆಯು ಶ್ರೀ ಯು.ಹೆಚ್. ಮೊಹಮದ್, ಶ್ರೀ ಕೆ. ಪ್ರಬೋಧ ಹಾಗೂ ಶ್ರೀ ಪ್ರಸನ್ನಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಾಗಿ ಪದೋನ್ನತಿ ನೀಡಿ ಗಿರಿಜನ ಕಲ್ಯಾಣ ಅಧಿಕಾರಿಗಳಾಗಿ ಕ್ರಮವಾಗಿ ಚಿತ್ರದುರ್ಗ, ಚಾಮರಾಜನಗರ ಹಾಗೂ ರಾಯಚೂರು ಜಿಲ್ಲೆಗಳಿಗೆ ಮಾರ್ಚ್ 2002 ರಿಂದ ಜುಲೈ 2002ರವರೆಗೆ ನೇಮಕಾತಿ ಮಾಡಿದ್ದು, ಈಗಿನ ತನಕ ಅವರಿಗೆ ಪದೋನ್ನತಿಯಾದ ಹುದ್ದೆಯ ವೇತನವು ದೊರಕಿರುವುದಿಲ್ಲ. ಇವರಲ್ಲಿ ಒಬ್ಬರು ಈಗಾಗಲೇ ನಿವೃತ್ತಿ ಹೊಂದಿರುವುದರಿಂದ ಈ ಮೂರು ಹುದ್ದೆಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಸಮಾನ ಹುದ್ದೆಗಳೆಂದು ಉನ್ನತೀಕರಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರುರವರು ಗಿರಿಜನ ಕಲ್ಯಾಣಾಧಿಕಾರಿಗಳ ಹುದ್ದೆಯು ಸಮಾಜ ಕಲ್ಯಾಣ ಇಲಾಖೆ ವೃಂದ ಮತ್ತು ನೇಮಕಾತಿ ನಿಯಮಗಳಿಗನುಸಾರವಾಗಿ ಶೇ.80 ರಷ್ಟು ಹುದ್ದೆಯನ್ನು ಇಲಾಖಾ ವತಿಯಿಂದಲೂ ಮತ್ತು ಶೇ.50 ರಷ್ಟು ಹುದ್ದೆಗಳನ್ನು ಲೋಕಸೇವಾ ಆಯೋಗದ ಮುಖಾಂತರ ನೇಮಕ ಮಾಡಿ ಭರ್ತಿ ಮಾಡಲಾಗುತ್ತಿದ್ದು, ಸದರಿ ಹುದ್ದೆಗೆ ಬೇರೆ ಇಲಾಖೆಯಿಂದ ಅಂದರೆ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳನ್ನು ನಿಯೋಜಿಸಿದ್ದು, ಸದರಿ ಹುದ್ದೆಯ ವೇತನ ಶ್ರೇಣಿ ಗಿರಿಜನ ಕಲ್ಯಾಣಾಧಿಕಾರಿಗಳ ಹುದ್ದೆಗಳ ಕರ್ತವ್ಯ ಹಾಗೂ ವೇತನ ಶ್ರೇಣಿಯಲ್ಲಿ ವ್ಯತ್ಯಾಸ ಇರುತ್ತದೆ.

ಗಿರಿಜನ ಕಲ್ಯಾಣಾಧಿಕಾರಿಗಳ ಹುದ್ದೆಗೆ ಗ್ರೂಪ್-ಎ ವೇತನ ಶ್ರೇಣಿ ರೂ.7400-13120 ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹುದ್ದೆಗೆ ಸೀನಿಯರ್ ಗ್ರೂಪ್-ಎ ವೇತನ ಶ್ರೇಣಿ ರೂ.9580-11400 ಇದ್ದು ವೃಂದವು ಇಲಾಖೆಯ ಉಪ ನಿರ್ದೇಶಕರ ಸಮಾನ ಹುದ್ದೆಯಾಗಿರುತ್ತದೆ. ಇಲಾಖೆಯಲ್ಲಿ ಗಿರಿಜನ ಕಲ್ಯಾಣಾಧಿಕಾರಿಗಳ ಹುದ್ದೆಗೆ ಪ್ರತ್ಯೇಕವಾದ ವೃಂದ ಮತ್ತು ನೇಮಕಾತಿ ನಿಯಮಗಳಿಲ್ಲದೇ ಇರುವುದರಿಂದ, ವೃಂದ ಮತ್ತು ನೇಮಕಾತಿ ನಿಯಮಗಳ ರಚನೆ ಆದ ಮೇಲೆ ಕ್ರಮ ಕೈಗೊಳ್ಳಬಹುದು ಎಂದು ತಿಳಿಸಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಸಕಇ 401 ಬಿಇಟಿ 2005, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2007**

ಶ್ರೀ ಯು.ಹೆಚ್. ಮೊಹಮದ್, ಶ್ರೀ ಕೆ. ಪ್ರಬೋಧ ಹಾಗೂ ಶ್ರೀ ಪ್ರಸನ್ನಕುಮಾರ್, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಇಲಾಖೆ ಇವರು ತಾತ್ಕಾಲಿಕವಾಗಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಗಿರಿಜನ ಕಲ್ಯಾಣಾಧಿಕಾರಿಗಳಾಗಿ ಚಿತ್ರದುರ್ಗ, ರಾಯಚೂರು ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸಿರುವುದರಿಂದ, ಮಾರ್ಚ್ 2002 ರಿಂದ ಜುಲೈ 2002ರವರೆಗೆ ಗಿರಿಜನ ಕಲ್ಯಾಣಾಧಿಕಾರಿ ಹುದ್ದೆಯನ್ನು ವೇತನ ಶ್ರೇಣಿ ರೂ.9580-14200ರ ಉಪ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 526 ವೆಚ್ಚ-3/06, ದಿನಾಂಕ:26.06.2007ರಲ್ಲಿ ಸಹಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 1506 ಸರ್ಕಾರದ ಅಧೀನ ಕಾರ್ಯದರ್ಶಿ-II,

ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸೇವೆಗಳು ವಿಭಾಗದಲ್ಲಿ ಅಧೀನ ಕಾರ್ಯದರ್ಶಿ, (ಸೇವೆಗಳು-ಸಮನ್ವಯ) ಹಾಗೂ ಪೂರಕ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸೇವೆಗಳು ವಿಭಾಗದಲ್ಲಿ 3 ಅಧೀನ ಕಾರ್ಯದರ್ಶಿಗಳು ಕಾರ್ಯನಿರ್ವಹಿಸುತ್ತಿದ್ದು, ಇವರುಗಳು ಅಖಿಲ ಭಾರತ ಸೇವೆಗೆ ಸೇರಿದ ಅಧಿಕಾರಿಗಳ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಅಧಿಕಾರಿಗಳ ಇಲಾಖಾ ಮುಖ್ಯಸ್ಥರ ಹಾಗೂ ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಗ್ರೂಪ್-ಎ ವೃಂದದ ಅಧಿಕಾರಿಗಳ ಸೇವಾ ವಿಷಯಗಳು. ಇಲಾಖಾ ವಿಚಾರಣೆ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ. ಜಿ.ಪಿ.ಎಫ್. ನಿವೃತ್ತಿ ಸೌಲಭ್ಯಗಳು ಮತ್ತು ಇತರೆ ವಿಷಯಗಳು ಹಾಗೂ ಇದರ ಜೊತೆಗೆ ಜಿಲ್ಲಾ ನ್ಯಾಯಾಧೀಶರ ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ವಿಷಯಗಳು ಬೆಂಗಳೂರು ಅರಮನೆಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸಿರುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಶಾಖೆಗಳಲ್ಲಿ ಕಾರ್ಯಭಾರವು ಹೆಚ್ಚಾಗಿದ್ದು ಹಾಗೂ ಮಾಹಿತಿ ಹಕ್ಕು ಅಧಿನಿಯಮದ ಪ್ರಕಾರ ಕೋರಿಕೆಗಳು ಹೆಚ್ಚಾಗುತ್ತಿರುವುದರಿಂದ ಈ ಅಧಿಕಾರಿಗಳ ಮೇಲೆ ಕಾರ್ಯದ ಒತ್ತಡ ಅಧಿಕವಾಗುತ್ತಿದೆ. ಸಿ.ಆ.ಸು.ಇ. (ಸೇವೆಗಳು) ವಿಭಾಗದ ಸುಗಮ ಕಾರ್ಯ ನಿರ್ವಹಣೆಯ ದೃಷ್ಟಿಯಿಂದ ಒಂದು ಹೆಚ್ಚುವರಿ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಸೃಜಿಸಿ ಈ ವಿಭಾಗದ ವಿವಿಧ ಶಾಖೆಗಳ ಕಾರ್ಯಗಳನ್ನು ಮರು ಹಂಚಿಕೆ ಮಾಡುವುದರಿಂದ ಈ ಶಾಖೆಗಳ ಮೇಲಿನ ಕಾರ್ಯ ಒತ್ತಡವನ್ನು ಕಡಿಮೆಗೊಳಿಸುವುದರ ಜೊತೆಗೆ ಸಮರ್ಪಕ ಕಾರ್ಯ ನಿರ್ವಹಣೆಗೆ ಅನುಕೂಲವಾಗುತ್ತದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 350 ಸಅಸೇ 2007, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2007**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸೇವೆಗಳು ವಿಭಾಗದಲ್ಲಿ ಕೆಳಕಂಡಂತೆ ಒಂದು ಹೆಚ್ಚುವರಿ ಅಧೀನ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ.

| | | |
|---|---|---|
| 1. | ಅಧೀನ ಕಾರ್ಯದರ್ಶಿ (ಸೇವೆಗಳು-ಸಮನ್ವಯ) | 1 ಹುದ್ದೆ |
| 2. | ಶಾಖಾಧಿಕಾರಿಗಳು | 2 ಹುದ್ದೆಗಳು |
| 3. | ಸಹಾಯಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ಬೆರಳಚ್ಚುಗಾರರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **9 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಟಿಪ್ಪಣಿ ಸಂಖ್ಯೆ:ಆಇ 1557/ವೆಚ್ಚ-5/2007 ದಿನಾಂಕ:8.8.2007 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1507

## ಕಾರ್ಮಿಕ ಸಚಿವಾಲಯ

**ವಿಷಯ:** 2007-08ನೇ ಸಾಲಿನಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸ್ಥಾಪನೆ ಬಗ್ಗೆ.

**ಓದಲಾಗಿದೆ:** 1. ಪತ್ರ ಸಂ.ಉತನಿ/ತರಬೇತಿ/ಯೋ-1/ವಿವ-06/2007-08 ದಿನಾಂಕ:19.04.2007

2. ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಸಿಎಮ್-2/1139/2007 ದಿನಾಂಕ: 2ನೇ ಮೇ 2007.

**ಪ್ರಸ್ತಾವನೆ:**

ರಾಜ್ಯದ ಮತ್ತು ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು 2007-08ನೇ ಆಯವ್ಯಯದಲ್ಲಿ ರೂ.300.00 ಲಕ್ಷಗಳನ್ನು ಒದಗಿಸಲಾಗಿದೆ.

ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಹತ್ತು ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳಿಗೆ ಅವಶ್ಯ ಹುದ್ದೆಗಳನ್ನು ಸೃಜಿಸುವಂತೆ, ವೃತ್ತಿಗಳನ್ನು ಮಂಜೂರು ಮಾಡುವಂತೆ ಹಾಗೂ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:02.05.2007 ರಂದು ಜರುಗಿದ ಸಭೆಯ ನಡವಳಿಯನ್ನು ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯೊಂದಿಗೆ ಲಗತ್ತಿಸುತ್ತಾ ಸಭೆಯ ನಿರ್ಣಯವನ್ನು ಅನುಷ್ಠಾನಗೊಳಿಸುವಂತೆ ಕೋರಲಾಗಿದೆ.

2007-08ನೇ ಸಾಲಿನಲ್ಲಿ ರಾಜ್ಯದ ಮೊಸಳೆಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ, ಸಕ್ಕರಾಯಪಟ್ಟಣ, ಗೋಕಾಕ, ಆಲೂರು, ಮಾಗಡಿ, ಶಿಡ್ಲಘಟ್ಟ ಕಿತ್ತೂರು, ನವಲಗುಂದ, ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ ಮತ್ತು ಭಟ್ಕಳಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಸದಾಗಿ ಪ್ರಾರಂಭಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2007**

2007-08ನೇ ಸಾಲಿನಲ್ಲಿ ರಾಜ್ಯದ ಈ ಕೆಳಗಿನ ಸ್ಥಳಗಳಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ತೆರೆಯಲು ಈ ಕೆಳಕಂಡ ಷರತ್ತಿನೊಂದಿಗೆ ಮಂಜೂರಾತಿ ನೀಡಲಾಗಿದೆ.

1) ಬೋಧನೇತರ ಸಿಬ್ಬಂದಿಯನ್ನು 10ಕ್ಕೆ ಸೀಮಿತಗೊಳಿಸುವುದು.

2) ಮೊದಲನೇ ವರ್ಷದಲ್ಲಿ ಅವಶ್ಯಕವಾದ ಸಿಬ್ಬಂದಿಯನ್ನು ತುಂಬುವುದು.

| | | | |
|---|---|---|---|
| 1 | ಮೊಸಳೆಹೊಸಹಳ್ಳಿ, ಹಾಸನ ಜಿಲ್ಲೆ. | 2 | ಕುಣಿಗಲ್, ತುಮಕೂರು ಜಿಲ್ಲೆ |
| 3 | ಉದಯಪುರ, ಹಾಸನ ಜಿಲ್ಲೆ | 4 | ಸಕಲೇಶಪುರ, ಹಾಸನ ಜಿಲ್ಲೆ |
| 5 | ಸಾಲಿಗ್ರಾಮ, ಮೈಸೂರು ಜಿಲ್ಲೆ | 6 | ಸಕ್ಕರಾಯಪಟ್ಟಣ, ಚಿಕ್ಕಮಗಳೂರು ಜಿಲ್ಲೆ |
| 7 | ಗೋಕಾಕ, ಬೆಳಗಾವಿ ಜಿಲ್ಲೆ | 8 | ಆಲೂರು, ಹಾಸನ ಜಿಲ್ಲೆ |
| 9 | ಮಾಗಡಿ, ಬೆಂಗಳೂರು ಗ್ರಾ, ಜಿಲ್ಲೆ | 10 | ಶಿಡ್ಲಘಟ್ಟ , ಕೋಲಾರ ಜಿಲ್ಲೆ |
| 11 | ಕಿತ್ತೂರು, ಬೈಲಹೊಂಗಲ ತಾಲ್ಲೂಕು | 12 | ನವಲಗುಂದ, ನವಲಗುಂದ ತಾಲ್ಲೂಕು |
| 13 | ಜಗಳೂರು, ಜಗಳೂರು ತಾಲ್ಲೂಕು | 14 | ಇಟಗಿ, ಹಡಗಲಿ ತಾಲ್ಲೂಕು |
| 15 | ಬಿಡ್ಕಲ್ ಕಟ್ಟೆ, ಕುಂದಾಪುರ ತಾಲ್ಲೂಕು | 16 | ಹಾರೋಹಳ್ಳಿ, ಕನಕಪುರ ತಾಲ್ಲೂಕು |
| 17 | ಬೇಗೂರು, ಗುಂಡ್ಲುಪೇಟೆ ತಾಲ್ಲೂಕು | 18 | ಹರಿಹರಪುರ, ಹೊಳೆನರಸೀಪುರ ತಾಲ್ಲೂಕು |
| 19 | ಭಟ್ಕಳ, ಉತ್ತರ ಕನ್ನಡ ಜಿಲ್ಲೆ | | |

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮೊಸಳೆ ಹೊಸಹಳ್ಳಿ, ಉದಯಪುರ, ಸಾಲಿಗ್ರಾಮ, ಸಕಲೇಶಪುರ, ಆಲೂರು, ಸಕ್ಕರಾಯಪಟ್ಟಣ, ಹರಿಹರಪುರ, ಕುಣಿಗಲ್ ಮತ್ತು ಮಾಗಡಿಗಳಲ್ಲಿ 2007-08ನೇ ಸಾಲಿನಲ್ಲಿ ಹೊಸ 9 ವೃತ್ತಿಗಳನ್ನು ಪ್ರಾರಂಭಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2230-03-101-0-35-059 ಇತರೆ ಖರ್ಚು ಲೆಕ್ಕಶೀರ್ಷಿಕೆಯಡಿ ಒದಗಿಸಿರುವ ರೂ. 3.00 ಕೋಟಿಗಳ (ರೂಪಾಯಿ ಮೂರು ಕೋಟಿಗಳು ಮಾತ್ರ) ಮತ್ತು ಪೂರಕ ಅಂದಾಜಿನಲ್ಲಿ ಒದಗಿಸುವ ರೂ. 3.00 ಕೋಟಿಗಳ ಅನುದಾನ (ರೂಪಾಯಿ ಮೂರು ಕೋಟಿಗಳು ಮಾತ್ರ) ಸೇರಿ ಒಟ್ಟು ರೂ.6.00 ಕೋಟಿಗಳಿಗೆ ವೆಚ್ಚವನ್ನು ಸೀಮಿತಗೊಳಿಸಿ ಭರಿಸತಕ್ಕದ್ದು. ರೂ. 6.00 ಕೋಟಿಗಳಿಗೂ ಮೀರಿ ಅನುದಾನ ಬೇಕಾದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯು ತನಗೆ ಒದಗಿಸಲಾದ ಅನುದಾನದಲ್ಲಿ ಉಳಿತಾಯ ತೋರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಯೋಇ:53:ಜಶ:2007 ದಿನಾಂಕ:09.05.2007ರ ಸಹಮತಿಯೊಂದಿಗೆ ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 292 ವೆಚ್ಚ-9/2007, ದಿ:8.8.2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 1509

## ಶಿಕ್ಷಣ ಸಚಿವಾಲಯ

**ವಿಷಯ:** ವೃತ್ತಿ ಶಿಕ್ಷಣ ನಿರ್ದೇಶನಾಲಯವು ನೀಡುವ ಗ್ರಂಥಾಲಯ ವಿಜ್ಞಾನ ವಿಷಯದ ಜೆ.ಒ.ಸಿ. ಕೋರ್ಸನ್ನು ಸಾರ್ವಜನಿಕ ಗ್ರಂಥಾಲಯ ಇಲಾಖೆಯು ನೀಡುವ ಗ್ರಂಥಾಲಯ ವಿಜ್ಞಾನ ಸರ್ಟಿಫಿಕೇಟ್‌ಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ "ಗ್ರಂಥಾಲಯ ಸಹಾಯಕರ" ಹುದ್ದೆಯ ನೇಮಕಾತಿಗಾಗಿ ತತ್ಸಮಾನವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ದಿನಾಂಕ:27.10.1978ರ ಅಧಿಸೂಚನೆ ಸಂಖ್ಯೆ: ಇಡಿ 106 ಪಿಎಂಎಲ್ 76ರಲ್ಲಿ ಒಳಗೊಂಡ ಮೈಸೂರು ರಾಜ್ಯ ಗ್ರಂಥಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1978.
2. ಅರ್ಜಿಗಳು ಸಂಖ್ಯೆ:6627 ರಿಂದ 6630/2004, 266/2005, 9372, 9374 & 9375/2003, 4965/2006 ಮತ್ತು 6876/2003ರಲ್ಲಿ ಮಾನ್ಯ ಆಡಳಿತ ನ್ಯಾಯ ಮಂಡಳಿ ನೀಡಿದ ದಿನಾಂಕ:18.05.2007ರ ಆದೇಶ.
3. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರ ದಿನಾಂಕ:10.07.2007ರ ಪತ್ರ ಸಂಖ್ಯೆ:ಸಿಬ್ಬಂದಿ:ಎ3: ವೃ.ನೇ.ಬ: 56:ಸಂ-2:2004-05/2232.
4. ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, ಇವರ ದಿನಾಂಕ:03.07.2007ರ ಪತ್ರ ಸಂಖ್ಯೆ:ಡಿವಿಇ:ಎಸ್.ಐ.ವಿ.ಇ: 07-08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:27.10.1978ರ ಅಧಿಸೂಚನೆಯನ್ವಯ ಜಾರಿಗೆ ತರಲಾದ ಮೈಸೂರು ರಾಜ್ಯ ಗ್ರಂಥಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1978ರಲ್ಲಿ ಓದಿಕೊಂಡಂತೆ "ಗ್ರಂಥಾಲಯ ಸಹಾಯಕರ" ಹುದ್ದೆಯ ನೇಮಕಾತಿಗೆ ಸಂಬಂಧಿಸಿದಂತೆ ಈ ಕೆಳಕಂಡ ವಿದ್ಯಾರ್ಹತೆಯನ್ನು ನಿಗದಿಪಡಿಸಲಾಗಿರುತ್ತದೆ.

"Should be a holder of a Certificate in Library Science awarded by the Government Library Training School, Bangalore or equivalent qualification.

Should have not less than one year's experience in a Library recognised by the Government.

Age: Should not have attained the age of 45 years".

2. ಮೇಲೆ (2)ರಲ್ಲಿ ಓದಲಾದ 18.05.2007ರ ತನ್ನ ಆದೇಶದನ್ವಯ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಈ ಕೆಳಗೆ ಉದ್ಧರಿಸಿದಂತೆ ಅವಲೋಕಿಸಿದೆ.

"It is quiet distressing to note that even though the C&R Rules mandates declaration of equivalent qualification even after almost three decades the Department has not declared any qualifications as equivalent............".

3. ಮೇಲೆ (3)ರಲ್ಲಿ ಓದಲಾದ ದಿನಾಂಕ:10.07.2007ರ ಪತ್ರದನ್ವಯ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರು ಇಲಾಖೆಯಲ್ಲಿ ಗ್ರಂಥಾಲಯ ಸಹಾಯಕರ ಹುದ್ದೆಗೆ ಪರಿಗಣಿಸಲಾಗುತ್ತಿರುವ ಗ್ರಂಥಾಲಯ ವಿಜ್ಞಾನದಲ್ಲಿ ಸರ್ಟಿಫಿಕೇಟ್ (ಗ್ರಂಥಾಲಯ ಇಲಾಖೆ ನೀಡುವ) ಅಥವಾ ವೃತ್ತಿ ಶಿಕ್ಷಣ ಇಲಾಖೆಯಿಂದ ನೀಡಲಾಗುವ ಗ್ರಂಥಾಲಯ ವಿಜ್ಞಾನ ಕೋರ್ಸನ್ನು (ಜೆ.ಒ.ಸಿ.) ತತ್ಸಮಾನ ವಿದ್ಯಾರ್ಹತೆ ಎಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ದಿನಾಂಕ:03.07.2007ರ ಪತ್ರದನ್ವಯ ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ ಇವರು ಸಹ ವೃತ್ತಿ ಶಿಕ್ಷಣ ಕೋರ್ಸಿನ ಗ್ರಂಥಾಲಯ ವಿಜ್ಞಾನ ವಿಷಯದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳನ್ನು ಗ್ರಂಥಾಲಯ ಸಹಾಯಕರ ಹುದ್ದೆಗೆ ನೇಮಿಸಬಹುದೆಂದು ಅಭಿಪ್ರಾಯಿಸಿರುತ್ತಾರೆ.

5. ಮೇಲ್ಕಂಡ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ ಹಾಗೂ ಈ ಕೆಳಕಂಡ ವಿದ್ಯಾರ್ಹತೆಯುಳ್ಳ ಅಭ್ಯರ್ಥಿಗಳನ್ನು ಸಾರ್ವಜನಿಕ ಗ್ರಂಥಾಲಯ ಇಲಾಖೆಯ "ಗ್ರಂಥಾಲಯ ಸಹಾಯಕರ" ಹುದ್ದೆಯ ನೇಮಕಾತಿಗೆ ಅರ್ಹರೆಂದು ಪರಿಗಣಿಸಲು ತೀರ್ಮಾನಿಸಿದೆ.

"Job Oriented Course Certificate with Library science as a subject offered by the Vocational Education Directorate".

6. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಮತ್ತು ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ ಇವರುಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 83 ಎಲ್‌ಐಟಿ 2006, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2007**

7 ಮೇಲೆ (1)ರಲ್ಲಿ ಓದಲಾದ ಹಾಗೂ ಮೆಲಿನ ಕಂಡಿಕೆ (1)ರಲ್ಲಿ ಉದ್ಧರಿಸಲಾದ ನಿಯಮಗಳನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ "ಗ್ರಂಥಾಲಯ ಸಹಾಯಕರ" ಹುದ್ದೆಯ ನೇಮಕಾತಿಗೆ ಸಂಬಂಧಿಸಿದಂತೆ, ವೃತ್ತಿ ಶಿಕ್ಷಣ ನಿರ್ದೇಶನಾಲಯವು ನೀಡುವ ಗ್ರಂಥಾಲಯ ವಿಜ್ಞಾನ ವಿಷಯೋದ ಜೆ.ಒ.ಸಿ ಕೋರ್ಸನ್ನು ಸಾರ್ವಜನಿಕ ಗ್ರಂಥಾಲಯ ಇಲಾಖೆಯು ನೀಡುವ ಗ್ರಂಥಾಲಯ ವಿಜ್ಞಾನ ಸರ್ಟಿಫಿಕೇಟ್‌ಗೆ ತತ್ಸಮಾನವೆಂದು ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

ಪಿ.ಆರ್. 1510